# CRC | BRC | DIET| ಗಳ ಬದಲಾದ ಪಾತ್ರ

ಕೋವಿಡ್–19 ಎಂಬ ಈ ಸರ್ವವ್ಯಾಪೀ ಸಾಂಕ್ರಾಮಿಕವು ಇಡೀ ಮನುಸಂಕುಲವನ್ನೇ ಮಾರಕವಾಗಿ ಕಾಡುತ್ತಿದೆ—ಅದರಲ್ಲೂ ಮಕ್ಕಳನ್ನು ಬಹುತೀಕ್ಷ್ಣವಾಗಿ ಕಾಡುತ್ತಿದೆ. ಮಕ್ಕಳ ಕೌಟುಂಬಿಕ ಹಾಗೂ ಸಾಮಾಜಿಕ ಜೀವನಗಳ ಮೇಲೆ ಅದರ ಕರಿನೆರಳು ಬಿದ್ದಿದ್ದರೆ, ಅವರ ಶಿಕ್ಷಣವಂತೂ ಅತಿ ಸಂಕಷ್ಟಕ್ಕೊಳಗಾಗಿದೆ. ಯುನೆಸ್ಕೋ ವರದಿಯೊಂದರ ಪ್ರಕಾರ ವಿಶ್ವದಾದ್ಯಂತ ಶಾಲೆಗೆ ಹೋಗುವ ಶೇಕಡಾ.90ರಷ್ಟು ಮಕ್ಕಳ ಶಿಕ್ಷಣದ ಓಘಕ್ಕೆ ಅದು ಭಂಗತಂದಿದೆ.

*ಹ್ಯೂಮನ್ ರೈಟ್ಸ್ ವಾಚ್* (ಮಾನವ ಹಕ್ಕುಗಳ ಪಹರೆ) ವರದಿಯೊಂದು, ಕೋವಿಡ್–19ರ ಕಾರಣದಿಂದಾಗಿ ಶಾಲೆಗಳನ್ನು ಮುಚ್ಚಬೇಕಾಗಿ ಬಂದು, ಸಾಂಕ್ರಾಮಿಕದ ಸಂದರ್ಭದಲ್ಲಿ ಎಲ್ಲಾ ಮಕ್ಕಳಿಗೂ ತಮ್ಮ ಕಲಿಕೆಯನ್ನು ಮುಂದುವರಿಸಲು ಅಗತ್ಯವಿರುವ ಸಾಧನಗಳಾಗಲೀ, ಅವಕಾಶಗಳಾಗಲೀ ಲಭ್ಯವಿರಲಿಲ್ಲ ಎಂಬ ಕಾರಣಕ್ಕೆ ಹೇಗೆ ಅದು ಮಕ್ಕಳ ಮೇಲೆ ಅಸಮಾನವಾಗಿ ದುಷ್ಪರಿಣಾಮ ಬೀರಿದೆ ಎಂಬುದನ್ನು ದಾಖಲಿಸುತ್ತದೆ. ಆನ್‌ಲೈನ್ ಕಲಿಕೆಯನ್ನು ಅತಿಯಾಗಿ ನೆಚ್ಚಬೇಕಾಗಿ ಬಂದದ್ದರಿಂದ ಶಿಕ್ಷಣಕ್ಕೆ ಅವಶ್ಯಕವಾದ ಬೆಂಬಲದ ವಿಷಯವಾಗಿ ಈ ಮೊದಲೇ ಇದ್ದ ಅಸಮಾನ ವಿತರಣೆಯನ್ನು ಇದು ಇನ್ನಷ್ಟು ಉಲ್ಬಣಗೊಳಿಸಿದೆ ಎಂದು ಈ ವರದಿ ಹೇಳುತ್ತದೆ. ಆನ್‌ಲೈನ್ ಕಲಿಕೆಯಲ್ಲಿ ಎಲ್ಲಾ ಮಕ್ಕಳೂ ಸಮಾನವಾಗಿ ಪಾಲ್ಗೊಳ್ಳುವುದನ್ನು ಜಾರಿ ಮಾಡುವ ಶಿಕ್ಷಣ ನೀತಿ, ಸಂಪನ್ಮೂಲ ಅಥವಾ ಮೂಲಸೌಕರ್ಯಗಳನ್ನಾಗಲೀ ಹಲವು ಸರ್ಕಾರಗಳು ಹೊಂದಿರಲಿಲ್ಲ.

**ಹಿನ್ನೆಲೆ**

ದಶಕಗಳಷ್ಟು ಸುದೀರ್ಘವಾದ, ನಿಧಾನಗತಿಯದ್ದಾಗಿದ್ದರೂ ದೃಢವಾಗಿ ಸಾಗುತ್ತಿದ್ದ ಮಕ್ಕಳ ಶಿಕ್ಷಣ ಮಾರ್ಚ್ 2020ರಲ್ಲಿ ಇದ್ದಕ್ಕಿದ್ದಂತೆ ನಿಲುಗಡೆ ಕಂಡಿತು. ಏಪ್ರಿಲ್ ವೇಳೆಗಾಗಲೇ ದೇಶದಾದ್ಯಂತ ನೂತನ ಕೊರೋನಾ ವೈರಾಣು ಹರಡುವಿಕೆಯ ಕಾರಣದಿಂದ ದೊಡ್ಡ ಸಂಖ್ಯೆಗಳಲ್ಲಿ ವಿದ್ಯಾರ್ಥಿಗಳು ತಮ್ಮ ಅಂಗನವಾಡಿ, ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಗಳಿಗೆ ಹೋಗುವುದನ್ನು ನಿಲ್ಲಿಸಬೇಕಾಯಿತು. ಬಳಿಕ, ದೇಶದ ಕೆಲವು ಭಾಗಗಳಲ್ಲಿ ಶಾಲೆಗಳು ವಿದ್ಯಾರ್ಥಿಗಳಿಗಾಗಿ ತೆರೆದವಾದರೂ, ಉಳಿದ ಭಾಗಗಳಲ್ಲಿ ವಿದ್ಯಾರ್ಥಿಗಳು ತಮ್ಮ ಶಾಲೆಗಳಿಗೆ ಮರಳುವುದು ಇನ್ನೂ ಸಾಧ್ಯವಾಗಿಲ್ಲ. ಶಾಲೆ ಮುಚ್ಚಿದ ಸಂದರ್ಭದಲ್ಲಿ ಬಹುತೇಕ ಭಾಗಗಳಲ್ಲಿ ಶಿಕ್ಷಣವನ್ನು ಆನ್‌ಲೈನ್ ಅಥವಾ ದೂರ ಕಲಿಕೆಯ ಮಾಧ್ಯಮಗಳ ಮೂಲಕ ನೀಡಲಾಯಿತಾದರೂ, ಈ ವಿಧಾನಗಳ ಯಶಸ್ಸು ಹಾಗೂ ಗುಣಮಟ್ಟದಲ್ಲಿ ಭಾರಿ ಕಂದಕಗಳೇ ಇವೆ ಎಂದರೆ ತಪ್ಪಾಗುವುದಿಲ್ಲ. ಅಂತರ್ಜಾಲ ಲಭ್ಯತೆ, ಸಂಪರ್ಕ ಸಾಧ್ಯತೆ, ಭೌತಿಕ ಸನ್ನದ್ಧತೆ, ಶಿಕ್ಷಕರ ತರಬೇತಿ ಹಾಗೂ ಮನೆಗಳ ಪರಿಸ್ಥಿತಿಯಂತಹ ಅನೇಕ ಸಮಸ್ಯೆಗಳು ಈ ದೂರ ಕಲಿಕೆಯ ಕಾರ್ಯ ಸಾಧುತ್ವಕ್ಕೆ ಸೆಡ್ಡುಹೊಡೆದು ನಿಂತಿವೆ.

"ಮಾನವ ಹಕ್ಕುಗಳ ಪಹರೆ"ಯ ಹಿರಿಯ ಶಿಕ್ಷಣ ಸಂಶೋಧಕರಾದ ಎಲಿನ್ ಮಾರ್ತಿನೆ ಅವರು, "ಸಾಂಕ್ರಾಮಿಕದ ಸಂದರ್ಭದಲ್ಲಿ ಮಿಲಿಯನ್‌ಗಟ್ಟಲೆ ಮಕ್ಕಳು ಶಿಕ್ಷಣದಿಂದ ವಂಚಿತರಾಗಿರುವುದರಿಂದ, ಉತ್ತಮ ಮತ್ತು ಹೆಚ್ಚು ನ್ಯಾಯಯುತ ಹಾಗೂ ಕಟ್ಟುಮಸ್ತಾದ ಶಿಕ್ಷಣ ಪದ್ಧತಿಗಳ ಪುನರ್ನಿರ್ಮಾಣದ ಮೂಲಕ ಶಿಕ್ಷಣ ಹಕ್ಕು ಕಾಯ್ದೆಯ ರಕ್ಷಣೆಯನ್ನು ಬಲಪಡಿಸುವ ಕಾಲ ಈಗ ಸನ್ನಿಹಿತವಾಗಿದೆ. ನಮ್ಮ ಗುರಿ ಸಾಂಕ್ರಾಮಿಕ ರೋಗಕ್ಕೆ ಹಿಂದೆ ಇದ್ದ ಸ್ಥಿತಿಗೆ ಮರಳುವುದಷ್ಟೇ ಆಗಿರಕೂಡದು. ಬದಲಾಗಿ ಬಹಳ ಕಾಲದಿಂದ ನಮ್ಮ ಶಾಲೆಗಳು ಮುಕ್ತವಾಗಿರುವುದನ್ನು ಮತ್ತುಎಲ್ಲಾ ಮಕ್ಕಳನ್ನೂ ಸ್ವಾಗತಿಸುವಂತಿರುವುದನ್ನು ನಿರ್ಬಂಧಿಸಿರುವ ನಮ್ಮ ಪದ್ಧತಿಯಲ್ಲಿನ ದೋಷಗಳನ್ನು ಸರಿಪಡಿಸಿಕೊಳ್ಳುವುದಾಗಿದೆ."

ಸರ್ಕಾರಿ ಹಾಗೂ ಸರ್ಕಾರೇತರ ಸಂಸ್ಥೆಗಳೆರಡೂ ಈ ಸಮಸ್ಯೆಯನ್ನು ಬಗೆಹರಿಸುವಲ್ಲಿ ತೊಡಗಿಸಿಕೊಳ್ಳಲು ಬಹಳಷ್ಟಿದೆ. ಕೆಲವು ತತ್‌ಕ್ಷಣದ ಪ್ರಯತ್ನಗಳು ಕಂಡುಬಂದರೂ ಅವು ಸುಸಂಬದ್ಧವಾಗಿರುವ ಪ್ರವೃತ್ತಿ ತೋರದೆ ಹೋದದ್ದರಿಂದ ಬಹಳಷ್ಟು ಯಶಸ್ಸು ಕಾಣಲಾಗಲಿಲ್ಲ. ಸರ್ಕಾರಿ ಪ್ರಯತ್ನಗಳ ಭಾಗವಾಗಿ ಭಾರತದ ಹಲವು ರಾಜ್ಯಗಳು ಆನ್‌ಲೈನ್ ಶಿಕ್ಷಣವನ್ನು ಜಾರಿಗೊಳಿಸಲು ಹಾಗೂ ಇತರ ಹಲವು ವಿಧಾನಗಳ ಮೂಲಕ ಮಕ್ಕಳು ಶಿಕ್ಷಣದೊಂದಿಗಿನ ಸಂಪರ್ಕ ಕಡಿದುಕೊಳ್ಳದಂತೆ ನೋಡಿಕೊಳ್ಳಲು ಪ್ರಯತ್ನಿಸಿವೆ. ಆದರೆ, ಪೋಷಕರಿಗೆ ಅಂತರ್ಜಾಲ ಲಭ್ಯತೆ ದೊರೆಯದೇ ಹೋದದ್ದು ಹಾಗೂ ಅಗತ್ಯವಿರುವ ಸಾಧನಗಳಿಗಾಗಿ ಹಣಕಾಸಿನ ಅನುಕೂಲ ಹೊಂದಿರದೇ ಇದ್ದದ್ದು ಈ ಪ್ರಯತ್ನಗಳ ಫಲವು ಗ್ರಾಮೀಣ ಹಾಗೂ ವಂಚಿತ ಕುಟುಂಬಗಳನ್ನು ತಲುಪಲು ಆಗದಿದ್ದಕ್ಕೆ ಕಾರಣವಾಗಿವೆ. ಕೆಲವೇ ಸಂಪನ್ಮೂಲಗಳನ್ನು ಹೊಂದಿದ್ದ ಶಾಲೆಯ ವಿದ್ಯಾರ್ಥಿಗಳು ಈ ಮೊದಲೇ ಕಲಿಕೆಯ ಅಡಚಣೆಗಳನ್ನು ಎದುರಿಸುತ್ತಿದ್ದು, ಇವು ಡಿಜಿಟಲ್ ಮಾಧ್ಯಮಗಳ ಪರಿಮಿತಿಗಳ ಕಾರಣದಿಂದಾಗಿ ತಮ್ಮ ವಿದ್ಯಾರ್ಥಿಗಳಿಗೆ ಕಲಿಸುವುದರಲ್ಲಿ ಎದುರಿಸುತ್ತಿದ್ದ ಸವಾಲುಗಳು ವಿಶೇಷವಾಗಿದ್ದವು. ಇದರ ಜೊತೆಗೆ, ನಮ್ಮ ಶಿಕ್ಷಣ ಪದ್ಧತಿಗಳು ಮಕ್ಕಳಿಗೆಂತೊ ಅಂತೆಯೇ ಶಿಕ್ಷಕರಿಗೂ ಡಿಜಿಟಲ್ ಸಾಕ್ಷರತೆಯನ್ನು ಪೂರೈಸುವುದರಲ್ಲಿ ಬಹಳಷ್ಟು ಬಾರಿ ಸೋತಿವೆ. ಇದಾಗಿದ್ದರೆ ಅವರು ಈ ತಂತ್ರಜ್ಞಾನವನ್ನು ಸುರಕ್ಷಿತವಾಗಿಯೂ, ವಿಶ್ವಾಸಪೂರ್ವಕವಾಗಿಯೂ ಬಳಸಿಕೊಳ್ಳುವಂತಾಗುತ್ತಿತ್ತು.

ಇಂತಹ ನಿರ್ಣಾಯಕ ಕಾಲಘಟ್ಟದಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಕಾರ್ಯನಿರತವಾಗಿರುವ ಸರ್ಕಾರಿ ಹಾಗೂ ಸರ್ಕಾರೇತರ ಶೈಕ್ಷಣಿಕ ಸಂಸ್ಥೆಗಳು ಹಾಗೂ ಅವುಗಳ ಆಡಳಿತ ವರ್ಗದ ಹೊಣೆಗಾರಿಕೆ ಹೆಚ್ಚಾಗಿದೆ. ಶಿಕ್ಷಣ ತಜ್ಞರು, ವಿದ್ಯಾರ್ಥಿಗಳು ಹಾಗೂ ಪೋಷಕರು ಈ ಸಂಸ್ಥೆಗಳ ಬಗ್ಗೆ ಬಹಳಷ್ಟು ಆಶಾಭಾವನೆ ಹೊಂದಿದ್ದಾರೆ. NCERT (ರಾಷ್ಟ್ರೀಯ ಶೈಕ್ಷಣಿಕ ಸಂಶೋಧನೆ ಹಾಗೂ ತರಬೇತಿ ಪರಿಷದ್), SCERT (ರಾಜ್ಯ ಶೈಕ್ಷಣಿಕ ಸಂಶೋಧನೆ ಹಾಗೂ ತರಬೇತಿ ಪರಿಷದ್), DIET (ಜಿಲ್ಲಾ ಶಿಕ್ಷಣ ತರಬೇತಿ ಸಂಸ್ಥೆ), BRC (ಬ್ಲಾಕ್ ಸಂಪನ್ಮೂಲ ಕೇಂದ್ರ), CRC (ಕ್ಲಸ್ಟರ್ ಸಂಪನ್ಮೂಲ ಕೇಂದ್ರ) ಸಂಸ್ಥೆಗಳು ಸದ್ಯದ ಪರಿಸ್ಥಿತಿಯಲ್ಲಿ ತಮ್ಮ ಪಾತ್ರವನ್ನು ಕಾಲಕ್ಕೆ ತಕ್ಕಂತೆ ಪರಿಷ್ಕರಿಸಿಕೊಳ್ಳಲು ಯತ್ನಿಸುತ್ತಿವೆ. ಆದರೆ, ಕಳೆದ ಎರಡು ವರ್ಷಗಳಲ್ಲಿ (2020–21, 2021–22) ಔಪಚಾರಿಕ ಶಿಕ್ಷಣ ದೊರೆಯದೆಯೇ ಮುಂದಿನ ತರಗತಿಗಳಿಗೆ ತೇರ್ಗಡೆ ಹೊಂದಿರುವ ಅಸಂಖ್ಯಾತ ಮಕ್ಕಳು ತಮ್ಮ ಕಲಿಕೆಯಲ್ಲಿ ಬಿರುಕಿನ ಸಮಸ್ಯೆಯನ್ನು ಎದುರಿಸುವಂತಾಗಿದೆ. ಇನ್ನೂ ಎಷ್ಟು ವರ್ಷ ಅವರು ಈ ಸಮಸ್ಯೆಯನ್ನು ಎದುರಿಸಬೇಕಾಗಬಹುದು ಎಂಬುದರ ಬಗ್ಗೆ ಏನನ್ನೂ ಹೇಳಲಾಗದ ಸ್ಥಿತಿಯಲ್ಲಿ ನಾವಿದ್ದೇವೆ. ಪ್ರತಿ ಹಳ್ಳಿಗೂ ಸರಳವೂ, ಅಧಿಕೃತವೂ ಹಾಗೂ ಪ್ರಾಯೋಗಿಕವೂ ಆದ ಶಿಕ್ಷಣವು ದೊರೆಯುವಂತೆ ಆಯೋಜಿಸುವುದು ಜಿಲ್ಲಾಡಳಿತ ಹಾಗೂ ಶಾಲೆಗಳ ಹೊಣೆಗಾರಿಕೆಯಾಗಿದೆ. ಒಂದು ನಿರ್ದಿಷ್ಟ ಕ್ಷೇತ್ರದ ಮಕ್ಕಳೊಡನೆ ದಿನವೂ ಕೆಲಸ ಮಾಡುತ್ತಿರುವ ವ್ಯಕ್ತಿಗಳು ಹಾಗೂ ಸಂಸ್ಥೆಗಳು ಆಯೋಜನೆ ಹಾಗೂ ಅನುಷ್ಠಾನಗಳ ಸಂದರ್ಭಗಳಲ್ಲಿ ಆ ಕ್ಷೇತ್ರದ ಸ್ಥಿತಿಗತಿಗಳನ್ನು ಮನಸ್ಸಿನಲ್ಲಿಟ್ಟುಕೊಂಡು, ಅವುಗಳನ್ನು ಕಾಲೋಚಿತ ಪರಿಷ್ಕರಣೆಗೆ ಒಳಪಡಿಸುವ ಅಗತ್ಯವಿದೆ.

ಸರ್ಕಾರದ ವತಿಯಿಂದ, SCERT ಮಕ್ಕಳಿಗೆ ಶಿಕ್ಷಣ ನೀಡಲು ಆನ್‌ಲೈನ್ ವಿಧಾನವನ್ನು ರಾಜ್ಯ ಮಟ್ಟದಲ್ಲಿ ಅಳವಡಿಸಿಕೊಂಡಿದೆ. ಅಭ್ಯಾಸ ಪತ್ರಿಕೆಗಳು, ವಿಡಿಯೋಗಳು, ಒಗಟುಗಳು ಇವೇ ಮುಂತಾದವುಗಳನ್ನು ಸಜ್ಜುಗೊಳಿಸಿಕೊಂಡು ಮಕ್ಕಳಿಗೆ ವಾಟ್ಸಾಪ್ ಮೂಲಕ ಅವನ್ನು ರವಾನಿಸುವ ಪ್ರಯತ್ನ ಮಾಡಲಾಯಿತು. ಒಂದು ಹಂತದವರೆಗೆ ಈ ಪ್ರಯಾಸಗಳು ಪರಿಣಾಮಕಾರಿಯಾಗಿದ್ದವು. ಆದರೆ, ಮೇಲೆ ಈಗಾಗಲೇ ಸೂಚಿಸಿರುವ ಸಮಸ್ಯೆಗಳನ್ನು ಹೊರತುಪಡಿಸಿಯೂ, ಕಲಿಕಾ ಸಾಮಗ್ರಿಯು ಮಕ್ಕಳ ಹಂತಕ್ಕೆ ಹೊಂದಾಣಿಕೆ ಆಗದಂತಹ (ಏಕೆಂದರೆ, ಮಕ್ಕಳ ಶೈಕ್ಷಣಿಕ ಹಂತದ ಮೌಲ್ಯಮಾಪನ ಆಗುವುದಕ್ಕೂ ಮುನ್ನವೇ ಈ ಸಾಮಗ್ರಿಗಳನ್ನು ಸಿದ್ಧಪಡಿಸಲಾಗಿತ್ತು) ಇತರ ಸಮಸ್ಯೆಗಳು ತಲೆದೋರಿದವು. ಜೊತೆಗೆ, ಕಲಿಕಾ ಸಾಮಗ್ರಿಗಳನ್ನು ಶಿಕ್ಷಕರ ನೆರವು ಪಡೆಯದೆಯೆ ಸಿದ್ಧಪಡಿಸಲಾಗಿತ್ತು ಹಾಗೂ ಪ್ರಾದೇಶಿಕ ಸ್ಥಿತಿಗತಿಗಳನ್ನು ಪರಿಗಣಿಸಿರಲಿಲ್ಲ. ಇದನ್ನು ಬೇರೆ ಶೈಕ್ಷಣಿಕ ಸಂಸ್ಥೆಗಳ ನೇರ ಮಧ್ಯಸ್ಥಿಕೆಯಿಲ್ಲದೆ SCERT ಹಂತದಲ್ಲಿ ಮಾಡಲಾಗಿತ್ತು. ಹೀಗಾಗಿ, ಇಂತಹ ಇತರ ಯೋಜನೆಗಳಂತೆ, ಇದು ಪ್ರಾಯೋಗಿಕ ಹಂತದಲ್ಲಿ ಅನಾಸಕ್ತಿಕರವಾಗಿಯೂ, ಸನ್ನಿವೇಶಕ್ಕೆ ಹೊರತಾಗಿಯೂ ಇರುವಂತೆ ತೋರಿ, ಈ ಕಾರಣದಿಂದ ಇದನ್ನು ವ್ಯವಸ್ಥಿತವಾಗಿ ಕಾರ್ಯಗತಗೊಳಿಸಲು ಆಗಲಿಲ್ಲ.

ಹಲವು ಸರ್ಕಾರಿ ಹಾಗೂ ಸರ್ಕಾರೇತರ ಸಂಘಟನೆಗಳು ನಿರಂತರವಾಗಿ ಶಿಕ್ಷಣಕ್ಷೇತ್ರದಲ್ಲಿ ಅನೇಕ ದಶಕಗಳಿಂದ ಕಾರ್ಯನಿರತವಾಗಿದ್ದರೂ ಸದ್ಯದ ಪರಿಸ್ಥಿತಿಯಲ್ಲಿ ಅವುಗಳ ಪ್ರಯಾಸವು ಪರಿಣಾಮ ಬೀರದೆ ಹೋಯಿತು. ಅವರು ಈ ಬದಲಾದ ಪರಿಸ್ಥಿತಿಗಳಲ್ಲಿ ಮಕ್ಕಳ ಜಿಲ್ಲೆ/ಪ್ರಾಂತ್ಯಗಳಿಗೆ ಅನುಗುಣವಾಗಿ ಮಕ್ಕಳಿಗಾಗಿ ಯೋಜನೆಯನ್ನು ರೂಪಿಸಿ, ಕಾರ್ಯನಿರತರಾಗಬೇಕಿತ್ತು.

**ಸರ್ಕಾರಿ ಸಂಸ್ಥೆಗಳು**

*ಶೈಕ್ಷಣಿಕ ತರಬೇತಿಯ ಜಿಲ್ಲಾ ಸಂಸ್ಥೆಗಳು*

ಶೈಕ್ಷಣಿಕ ತರಬೇತಿಯ ಜಿಲ್ಲಾಮಟ್ಟದ ಸಂಸ್ಥೆಗಳಾದ DIET ಗಳು ಜಿಲ್ಲೆಯಲ್ಲಿನ ಶಾಲೆಗಳ ಹಾಗೂ ಶೈಕ್ಷಣಿಕ ಸಂಸ್ಥೆಗಳ ಮಾರ್ಗದರ್ಶನಕ್ಕಾಗಿ ಸ್ಥಾಪಿಸಲ್ಪಟ್ಟ ಕೇಂದ್ರಗಳಾಗಿವೆ. ಭಾರತ ಸರ್ಕಾರದ ಶಿಕ್ಷಣ ಇಲಾಖೆಯಿಂದ ಸ್ಥಾಪಿಸಲ್ಪಟ್ಟ ಈ ಸಂಸ್ಥೆಗಳು ಶಿಕ್ಷಣಕ್ಷೇತ್ರದಲ್ಲಿ ದೀಪಸ್ತಂಭಗಳಂತಿವೆ. ಈ ಸಂಸ್ಥೆಗಳಿಗೆ ಬೋಧನೆ–ಕಲಿಕೆ ಸಂಪನ್ಮೂಲಗಳನ್ನು ನಿರ್ಮಿಸಿ ತಲುಪಿಸುವ, ಕ್ರಿಯಾತ್ಮಕತೆಯ ಸಂಶೋಧನೆಯನ್ನು ಪ್ರೋತ್ಸಾಹಿಸುವ, ಚಟುವಟಿಕೆ ಆಧಾರಿತ ಕಲಿಕೆಯನ್ನು ನೀಡುವ, ಅಗತ್ಯಕ್ಕನುಗುಣವಾಗಿ ಕಾರ್ಯಕ್ರಮಗಳನ್ನು ಆಯೋಜಿಸುವ ಹಾಗೂ ಶಿಕ್ಷಕರ ಕೆಲಸವನ್ನು ಸುಗಮಗೊಳಿಸುವ ಹೊಣೆಗಾರಿಕೆಯನ್ನು ನೀಡಲಾಗಿದೆ. ಬೋಧನೆಯಲ್ಲಿ ಶೈಕ್ಷಣಿಕ ತಂತ್ರಜ್ಞಾನವನ್ನು ಹಾಗೂ ಮೌಲ್ಯಮಾಪನದ ಆಧುನಿಕ ವಿಧಾನಗಳನ್ನು ಪರಿಚಯಿಸುವ ಹೊಣೆಗಾರಿಕೆಯೂ ಇದರ ಮೇಲಿದೆ.

ಪ್ರಚಲಿತ ಪರಿಸ್ಥಿತಿಯಲ್ಲಿ ಶಿಕ್ಷಕರು ಮತ್ತು ಮಕ್ಕಳೊಡನೆ ಬೇರು ಮಟ್ಟದಲ್ಲಿ ಕಾರ್ಯನಿರತವಾಗಿ, ತನ್ನ ಪಾತ್ರವನ್ನು ಇನ್ನಷ್ಟು ಸಮೃದ್ಧಗೊಳಿಸಿಕೊಳ್ಳುವ ಯೋಜನೆಯೇನಾದರೂ DIET ಗೆ ಇದ್ದರೆ, ಆನ್‌ಲೈನ್ ಕಲಿಕೆಯ ಸೌಕರ್ಯಗಳಿರದ ಮಕ್ಕಳ ಕಲಿಕೆಯಲ್ಲಿನ ಬಿರುಕನ್ನು ಮುಚ್ಚುವ ಪ್ರಯತ್ನಗಳನ್ನು ಅದು ಕೈಗೊಳ್ಳಬಹುದಾಗಿದೆ. ಇದನ್ನು ಸಾಧಿಸಲು DIET ಸಂಸ್ಥೆಗಳು ಈ ಕೆಳಗಿನ ಕ್ರಮಗಳನ್ನು ಅನುಸರಿಸಬಹುದು:

- ಭೌಗೋಳಿಕ, ಸಾಮಾಜಿಕ ಹಾಗೂ ಆರ್ಥಿಕ ಆಧಾರದ ಮೇಲೆ ಇಡೀ ಜಿಲ್ಲೆಯನ್ನೇ ಗುರುತಿಸುವುದು

•	ಮಕ್ಕಳ ಶೈಕ್ಷಣಿಕ ಅಗತ್ಯಗಳ ಮೌಲ್ಯನಿರ್ಣಯಕ್ಕಾಗಿ ಈಗಾಗಲೇ ಗುರುತಿಸಲಾದ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿರುವ ಶಿಕ್ಷಕರ ತಂಡವೊಂದನ್ನು ರಚಿಸುವುದು

•	ಈ ಮೌಲ್ಯನಿರ್ಣಯದ ಆಧಾರದ ಮೇಲೆ ಮಕ್ಕಳ ವಿಷಯಾಧಾರಿತ ಅಗತ್ಯಗಳನ್ನು ಪೂರೈಸುವಂತಹ ಅಲ್ಪಕಾಲಿಕ ಪಾಠ–ಪ್ರವಚನಗಳನ್ನು ನಡೆಸುವುದು. ಯಾರಿಗೆ ಆನ್‌ಲೈನ್ ಸೌಲಭ್ಯ ಇದೆಯೋ ಅವರೊಂದಿಗೆ ಆನ್‌ಲೈನ್ ಮೂಲಕ ಹಾಗೂ ಉಳಿದವರನ್ನು ವೈಯಕ್ತಿಕವಾಗಿ ಭೇಟಿಯಾಗುವ ಮೂಲಕ ಶಿಕ್ಷಕರು ಈ ಕೆಲಸವನ್ನು ಕೈಗೊಳ್ಳುವುದು

•	ತರಬೇತಿ, ಕಾರ್ಯಾಗಾರ, ವೈಯಕ್ತಿಕ ಭೇಟಿ ಇವೇ ಮೊದಲಾದವುಗಳ ಮೂಲಕ ಶಿಕ್ಷಕರ ಜೊತೆ ನಿರಂತರ ಸಂವಾದಗಳು ನಡೆಯಬೇಕು. ಇದರಿಂದ ನಮ್ಮ ಯೋಜನೆಗಳನ್ನು ಕಾಲಕ್ಕೆ ತಕ್ಕಂತೆ ಪರಿಷ್ಕರಿಸಿಕೊಂಡು ಅಗತ್ಯಗಳಿಗೆ ಅನುಗುಣವಾದ ಬದಲಾವಣೆಗಳನ್ನು ಮಾಡಿಕೊಳ್ಳುವುದು

•	ಪ್ರತಿ ಮಗುವಿನಲ್ಲೂ ಯಾವ ಕಲಿಕಾ–ಫಲಿತಾಂಶಗಳು ಇನ್ನೂ ಕಾರ್ಯರೂಪಕ್ಕೆ ಬಂದಿಲ್ಲ ಎಂಬುದನ್ನು ತಿಳಿಯಲು ಪ್ರತಿ ಮಗುವಿಗೂ ಈ ಯೋಜನೆಯ ಪರಿಣಾಮಕಾರಿ ಹಾಗೂ ಕಾಲಬದ್ಧ ಮೌಲ್ಯ ನಿರ್ಣಯ ನಡೆಯುವಂತೆ ನೋಡಿಕೊಳ್ಳುವುದು

•	ಮಕ್ಕಳಿಗಾಗಿ, ಅವರ ಮಟ್ಟಕ್ಕೆ ತಕ್ಕಂತೆ, ಅಭ್ಯಾಸ ಪತ್ರಿಕೆಗಳು ಮೊದಲಾದವುಗಳನ್ನು ಶಿಕ್ಷಕರ ಸಹಾಯ ಪಡೆದು ತಯಾರಿಸುವುದು

•	ಮಕ್ಕಳು ಅಭ್ಯಾಸ ಪತ್ರಿಕೆ, ಬೋಧನಾ–ಕಲಿಕಾ ಸಾಮಗ್ರಿಗಳು, ಗ್ರಂಥಾಲಯದ ಪುಸ್ತಕಗಳು ಇತ್ಯಾದಿಗಳನ್ನು ಪರಿಣಾಮಕಾರಿ ಕಲಿಕಾ ಸಂಪನ್ಮೂಲಗಳಾಗಿ ಬಳಸಲಾಗುವಂತೆ ಇಡೀ ಯೋಜನೆಯಲ್ಲಿ ಇವುಗಳಿಗೆ ತಕ್ಕ ಅವಕಾಶ ಕಲ್ಪಿಸಿಕೊಡುವುದು

•	ಈ ಇಡೀ ಪ್ರಕ್ರಿಯೆಯಲ್ಲಿ ಸಮುದಾಯದ ಅರ್ಹ ವ್ಯಕ್ತಿಗಳು ಮತ್ತು ಪೋಷಕರನ್ನು ಸ್ವಯಂ ಸೇವಕರೆಂದು ಗುರುತಿಸಿ, ಅವರು ತಮ್ಮ ಕುಟುಂಬದ, ನೆರೆಹೊರೆಯ ಹಾಗೂ ಪ್ರದೇಶದ ಮಕ್ಕಳೊಡನೆ ಕೆಲಸ ಮಾಡಲು ಅವರಿಗೆ ಸರಳ ಹಾಗೂ ಪ್ರಾಯೋಗಿಕ ರೀತಿಯ ತರಬೇತಿ ನೀಡುವುದು

ಅಂದರೆ, DIET ಸಂಸ್ಥೆಗಳು ಈಗ ನಿಜವಾಗಿಯೂ ದೀಪಸ್ತಂಭಗಳಂತೆ ಕೆಲಸ ಮಾಡಬೇಕು. ಇದಾಗಲು, ಈ ಕೆಲಸದಲ್ಲಿ ಅಗತ್ಯವಿರುವ ಎಲ್ಲರ ಸಹಕಾರವೂ ದೊರೆಯುವಂತೆ ಈ ಸಂಸ್ಥೆಗಳು ಶಿಕ್ಷಕರು, ಬ್ಲಾಕ್ ಸಂಪನ್ಮೂಲ ಕೇಂದ್ರಗಳು, ಕ್ಲಸ್ಟರ್ ಸಂಪನ್ಮೂಲ ಕೇಂದ್ರಗಳು ಹಾಗೂ ಇತರೆ ಶೈಕ್ಷಣಿಕ ಸಂಘಟನೆಗಳೊಂದಿಗೆ ಸಮನ್ವಯದಿಂದ ಕೆಲಸ ಮಾಡಬೇಕಿದೆ.

***ಬ್ಲಾಕ್ ಸಂಪನ್ಮೂಲ ಕೇಂದ್ರಗಳು***

ಬ್ಲಾಕ್ ಹಂತದಲ್ಲಿ, BRC ಯು ಜಿಲ್ಲಾ ಶಿಕ್ಷಣಾಧಿಕಾರಿಗಳೊಂದಿಗೆ (DEO) ಹಾಗೂ ಕ್ಲಸ್ಟರ್ ಸಂಪನ್ಮೂಲ ಕೇಂದ್ರಗಳೊಂದಿಗೆ (CRC) ಸಮನ್ವಯದಿಂದ ಕೆಲಸ ಮಾಡಿ ವಿವಿಧ ಸರ್ಕಾರಿ ಯೋಜನೆಗಳು ಶಾಲೆಯನ್ನು ತಲುಪುವುದನ್ನು ಖಾತ್ರಿಪಡಿಸಬೇಕಿದೆ. ಈ ಯೋಜನೆಗಳೆಂದರೆ:

1. ತರಗತಿ ಕೊಠಡಿಗಳು, ಶಾಲಾ ಆವರಣದ ಸುತ್ತಲಿನ ಗೋಡೆಗಳು, ಶೌಚಾಲಯಗಳು, ಇವೆ ಮೊದಲಾದ ರೀತಿಯ ಶಾಲೆಗಳ ಭೌತಿಕ ಮೂಲಸೌಕರ್ಯಗಳ ಅಭಿವೃದ್ಧಿಗಾಗಿ ಹಣ ಮಂಜೂರು ಮಾಡುವುದು.

2. ಶಾಲೆಯಿಂದ ದೂರದಲ್ಲಿರುವ ಮನೆಗಳಿಂದ ಬರುವ ಮಕ್ಕಳಿಗೆ "ಸಾರಿಗೆ ಪ್ರಮಾಣ ಪತ್ರ ಯೋಜನೆ" ಯನ್ನು ಮಂಜೂರು ಮಾಡುವುದು.

3. ವಿಶೇಷಚೇತನ   ಮಕ್ಕಳಿಗಾಗಿ ಅಗತ್ಯವಿರುವ ಶೈಕ್ಷಣಿಕ ಸಾಮಗ್ರಿಗಳು ಹಾಗೂ ಸಲಕರಣೆಗಳನ್ನು ದೊರಕಿಸಿಕೊಡುವುದು.

ಪ್ರತಿ BRC ಯಲ್ಲಿ ಐದರಿಂದ ಆರು ಸದಸ್ಯರಿದ್ದು, ಅವರು ಸದಾ ತಮ್ಮ ಬ್ಲಾಕಿನ ಶಾಲೆಗಳ ಮೇಲ್ವಿಚಾರಣೆ ನೋಡಿಕೊಳ್ಳುವುದೇ ಅಲ್ಲದೆ, ಉಸ್ತುವಾರಿಯನ್ನೂ ವಹಿಸಿಕೊಂಡಿರುತ್ತಾರೆ. ಅವರ ಗಮನಕ್ಕೆ ಬರುವ ಸಂಗತಿಗಳನ್ನು ಅವರು CRC ಗಳೊಂದಿಗೆ ಹಂಚಿಕೊಂಡು, ಇದರ ಆಧಾರದ ಮೇಲೆ ಆಯೋಜನೆ, ತರಬೇತಿ ಹಾಗೂ ಶಿಕ್ಷಣಗಳ ಗುಣಮಟ್ಟ ಸುಧಾರಣೆಯ ನಮೂನೆಯನ್ನು ರೂಪಿಸಿಕೊಳ್ಳುತ್ತಾರೆ.

BRC ಗಳ ಕರ್ತವ್ಯಗಳಲ್ಲಿ ಕೆಲವೆಂದರೆ:

- ಕೆಲಸದಲ್ಲಿರುವ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ತರಬೇತಿ ಸಂಯೋಜನೆ

- CRC ಗಳೊಂದಿಗೆ ಸಹಕರಿಸುತ್ತಾ ಶಾಲೆಗಳ ಕಾರ್ಯವೈಖರಿಯನ್ನು ಸುಧಾರಿಸಿ, ವ್ಯವಸ್ಥೆಯನ್ನು ಉತ್ತಮಗೊಳಿಸುವುದು

- ಸರ್ಕಾರೇತರ ಸಂಸ್ಥೆಗಳು ಹಾಗೂ ಸ್ಥಳೀಯ ಆಡಳಿತದೊಂದಿಗೆ ಸಹಕರಿಸುತ್ತಾ ಶಿಕ್ಷಣ ಹಕ್ಕು (RTE) ಕಾಯ್ದೆಯ ಕಟ್ಟಳೆಗಳು ಕಾರ್ಯಗತವಾಗುವಂತೆ ನೋಡಿಕೊಳ್ಳುವುದು

BRC ಗೆ ತನ್ನ ಬ್ಲಾಕಿನಲ್ಲಿ ಒಂದು ಮಹತ್ವದ ಪಾತ್ರವಿರುತ್ತದೆ. BRC ತನ್ನ ಸದಸ್ಯರನ್ನು ಹಾಗೂ ಇತರ ಸಂಪನ್ಮೂಲಗಳನ್ನು ಮಕ್ಕಳಿಗಾಗಿ ಕಾರ್ಯತತ್ಪರರಾಗುವಂತೆ ನಿರ್ದೇಶಿಸುವಂತಾದಾಗ ಮಕ್ಕಳಿಗೆ ಇದರಿಂದ ಲಾಭವಾಗುವುದು. ಉದಾಹರಣೆಗೆ, ಸದ್ಯಕ್ಕೆ ಶಾಲೆಗಳು ಮುಚ್ಚಿರುವಾಗ, BRCಯು ತನ್ನ ಅಧಿಕಾರದಲ್ಲಿರುವ ಸಂಪನ್ಮೂಲಗಳನ್ನು ಸಮುದಾಯ ತರಗತಿಗಳನ್ನು ತೆರೆಯಲು; ಸಮುದಾಯದ ಸ್ವಯಂ ಸೇವಕರನ್ನು ಮಕ್ಕಳ ಹಂತಕ್ಕೆ ಹಾಗೂ ಅಗತ್ಯಕ್ಕೆ ಅನುಗುಣವಾಗಿ ಸಮುದಾಯದ ತರಗತಿಗಳಿಗಾಗಿ ಸಾಮಗ್ರಿಗಳನ್ನು ಸಜ್ಜುಗೊಳಿಸಲು ತರಬೇತಿ ನೀಡಲು; ನಿಯಮಿತವಾಗಿ ಮಕ್ಕಳಿಗೆ ಕಲಿಸಲು ಹಾಗೂ ಅವರನ್ನು ಮೌಲ್ಯಮಾಪನ ಮಾಡಲು ಬಳಸಿಕೊಳ್ಳಬಹುದು.

ಸದ್ಯದ ಪರಿಸ್ಥಿತಿಯಲ್ಲಿ BRC ಗಳು ತಮ್ಮ ಪಾತ್ರಗಳನ್ನು ಪರಿಷ್ಕರಿಸಿಕೊಂಡು DIET ಗಳ ಜೊತೆ ಹೊಂದಾಣಿಕೆಯಿಂದ ಕೆಲಸಮಾಡುವ ಮೂಲಕ ಮಕ್ಕಳ ಕಲಿಕೆಯಲ್ಲಿನ ಬಿರುಕುಗಳನ್ನು ಜೋಡಿಸುವ ಪ್ರಯತ್ನ ಮಾಡಬಹುದು. ಕನಿಷ್ಠ ಪಕ್ಷ, ಶಾಲೆಗಳು ಮುಚ್ಚಿದಾಗ ಮಕ್ಕಳ ಕಲಿಕೆಯ ಹಂತಗಳು ಏನಿದ್ದವೋ ಅವನ್ನು ಪಾಲಿಸಿಕೊಂಡು ಬರುವಲ್ಲಿ ಇದರಿಂದ ಸ್ವಲ್ಪಮಟ್ಟಿನ ಯಶಸ್ಸು ಕಾಣಬಹುದಾಗಿದೆ.

ಇದನ್ನು ಮಾಡಲು BRC ಗಳು ಕೆಳಗಿನ ಕಾರ್ಯಗಳನ್ನು ಕೈಗೊಳ್ಳಬೇಕಾಗುತ್ತದೆ:

- DIET ಹಾಗೂ ಇತರ ಸಂಸ್ಥೆಗಳೊಂದಿಗೆ ಸಹಕರಿಸುವುದು

- ಕೋವಿಡ್–19 ನಿಂದಉಂಟಾಗಿರುವ ಈ ಪರಿಸ್ಥಿತಿಯಲ್ಲಿ ಮಕ್ಕಳೊಡನೆ ಹೇಗೆ ಕೆಲಸ ಮಾಡಬೇಕು ಎಂದು ಶಿಕ್ಷಕರೊಂದಿಗೆ ಚರ್ಚಿಸುವುದು ಹಾಗೂ ಶಿಕ್ಷಕರ ಅನುಭವದ ಆಧಾರದ ಮೇಲೆ ಘಟಕಗಳನ್ನು ಸಿದ್ಧಗೊಳಿಸುವ ಮೂಲಕ ಆನ್‌ಲೈನ್ ಕಾರ್ಯಾಗಾರಗಳು ಹಾಗೂ ತರಬೇತಿಯನ್ನು ಸಂಯೋಜಿಸುವುದು

- ಶಿಕ್ಷಕರು ಎಲ್ಲಾ ಮಕ್ಕಳನ್ನು ತಲುಪಲಾಗುವುದನ್ನು ಖಾತ್ರಿಪಡಿಸಲು ಶಾಲಾನುಕ್ರಮ ಯೋಜನೆಯನ್ನು ಹುಟ್ಟುಹಾಕುವುದು

- ಸ್ಥಳೀಯ ಸ್ಥಿತಿಗತಿಗಳಿಗೆ ಅನುಗುಣವಾಗಿ ಅಭ್ಯಾಸ ಪತ್ರಿಕೆಗಳು ಹಾಗೂ ಇತರ ಕಲಿಕಾ ಸಾಮಗ್ರಿಗಳನ್ನು ರಚಿಸಿಕೊಳ್ಳುವುದು

- ಶಾಲೆಗಳ ಪರಿಶೀಲನೆಯ ಸಮಯದಲ್ಲಿ ಶಿಕ್ಷಕರ ಅನುಭವ/ಸಮಸ್ಯೆಗಳನ್ನು ಆಲಿಸುವ ಮೂಲಕ ರಚನಾತ್ಮಕ ಹಿಮ್ಮಾಹಿತಿ ನೀಡುವುದು

- ಮಕ್ಕಳ ಕಲಿಕೆಯನ್ನು ಸೂಕ್ತ ರೀತಿಯಲ್ಲಿ ಮೌಲ್ಯಮಾಪನ ಮಾಡಲಾಗುತ್ತಿದೆ ಎಂಬುದನ್ನು ಖಾತ್ರಿಪಡಿಸುವುದು

- ಹಳ್ಳಿಗಳಲ್ಲಿನ ಸ್ವಯಂಸೇವಕರಿಗೆ ಅಲ್ಪಕಾಲಿಕ ತರಬೇತಿಗಳನ್ನು ಸಂಯೋಜಿಸುವುದು. ಹಳ್ಳಿಯಲ್ಲಿನ ಶಿಕ್ಷಿತ ಯುವಕರನ್ನು ಅಥವಾ ಪಿ.ಯು. ಹಂತದಲ್ಲಿ ಓದುತ್ತಿರುವ ವಿದ್ಯಾರ್ಥಿಗಳನ್ನು ಪ್ರಾಥಮಿಕ ಶಾಲಾ ಹಂತದ ಗಣಿತ ಮತ್ತು ಭಾಷೆಗಳನ್ನು ತಮ್ಮ ನೆರೆಹೊರೆಯ ಅಥವಾ ಪ್ರದೇಶದ ಮಕ್ಕಳಿಗೆ ಬೋಧಿಸುವಂತೆ ಹೇಳುವುದು

*ಕ್ಲಸ್ಟರ್ ಸಂಪನ್ಮೂಲ ಕೇಂದ್ರಗಳು*

ಶಾಲೆಗಳಿಗಾಗಿ ಕಾರ್ಯಕ್ರಮಗಳನ್ನು ಸಂಯೋಜಿಸುವ ಎಲ್ಲಾ ಶೈಕ್ಷಣಿಕ ಸಂಸ್ಥೆಗಳೊಂದಿಗೆ ನೇರ ಸಂಬಂಧ ಹೊಂದಿರುವ CRC ಗಳು ಕಾರ್ಯನಿರ್ವಹಣೆಯ ವಿಷಯವಾಗಿ ಜಿಲ್ಲಾ ಶಿಕ್ಷಣಾಧಿಕಾರಿ (DEO) ಹಾಗೂ ಬ್ಲಾಕ್ ಶಿಕ್ಷಣಾಧಿಕಾರಿ (CEO) ಗಳೊಂದಿಗೆ ನಿಕಟ

ಸಂಬಂಧ ಹೊಂದಿವೆ. ಪಂಚಾಯತಿ ಪ್ರಧಾನ ಕಾರ್ಯಾಲಯದ ಪ್ರೌಢಶಾಲೆಯನ್ನು ಕೇಂದ್ರವನ್ನಾಗಿ ಬಳಸಿಕೊಂಡು, ಆ ಪಂಚಾಯತಿಯ ಅಡಿಯಲ್ಲಿ ಬರುವ ಎಲ್ಲಾ ಶಾಲೆಗಳೂ ಆ ನಿರ್ದಿಷ್ಟ CRC ಯ ಮೇಲ್ವಿಚಾರಣೆಗೆ ಒಳಪಟ್ಟಿರುತ್ತವೆ.

CRCಯ ಕರ್ತವ್ಯಗಳೆಂದರೆ:

- ತರಗತಿಗಳನ್ನು ಗಮನಿಸಿಕೊಂಡು ತರಗತಿಯೊಳಗಿನ ಬೋಧನೆಯ ವಿಷಯದಲ್ಲಿ ಶಿಕ್ಷಕರಿಗೆ ಬೆನ್ನೆಲುಬಾಗಿ ನಿಲ್ಲುವುದು

- ಶಾಲೆಗಳಲ್ಲಿ ಮಕ್ಕಳ ದಾಖಲಾತಿಯನ್ನು ಹಾಗೂ ಮಕ್ಕಳು ಶಾಲೆ ತೊರೆಯದಂತೆ ಉಳಿಸಿಕೊಳ್ಳುವುದನ್ನು ಖಾತ್ರಿಪಡಿಸುವುದು

- ಮಾಸಿಕವಾಗಿ ಶಿಕ್ಷಕರ ಸಭೆಗಳನ್ನು ಕರೆಯುವುದು ಹಾಗೂ ಮಾಸಿಕವಾಗಿ ಶಿಕ್ಷಕರ ತರಬೇತಿ ಕಲಾಪ/ಅವಧಿಗಳನ್ನು ಹಮ್ಮಿಕೊಳ್ಳುವುದು

- ಶಾಲಾ ನಿರ್ವಹಣಾ ಸಮಿತಿಗಳೊಂದಿಗೆ, ಪೋಷಕರೊಂದಿಗೆ ಹಾಗೂ ಇತರ ಸಂಸ್ಥೆಗಳೊಂದಿಗೆ ಸಮನ್ವಯ ಸಾಧಿಸುವುದು

ಬದಲಾದ ಈ ಪರಿಸ್ಥಿತಿಯಲ್ಲಿ CRCಯು ಶಾಲಾ ಉಸ್ತುವಾರಿ ಸಮಿತಿ, ಪೋಷಕರು ಹಾಗೂ ಇಲಾಖೆಯ ಅಧಿಕಾರಿಗಳೊಂದಿಗೆ ಸಮಾಲೋಚನೆ ನಡೆಸಿ, ಶಿಕ್ಷಕರು ಹಾಗೂ ಸ್ವಯಂಸೇವಕರ ಸಹಾಯ ಪಡೆದು, ಗ್ರಾಮದ ಮೂರು ಅಥವಾ ನಾಲ್ಕು ತಾಣಗಳಲ್ಲಿ ಸಮುದಾಯ ತರಗತಿಗಳನ್ನು ಸಂಯೋಜಿಸಬಹುದು. ಪ್ರತಿ ಮಗುವಿನ ಪೂರ್ವ ಸಿದ್ಧತೆಯನ್ನು ಪರೀಕ್ಷಿಸುವ ಮೂಲಕ ಇದನ್ನು ಆಯೋಜಿಸಬಹುದು. ಮಕ್ಕಳಿಗೆ ಏನನ್ನು ಬೋಧಿಸಬಹುದು ಹಾಗೂ ಮೌಲ್ಯಮಾಪನದ ಪ್ರಕ್ರಿಯೆ ಹೇಗಿರಬೇಕು ಎಂಬುದನ್ನು ಶಿಕ್ಷಕರೊಂದಿಗೆ ಸಮಾಲೋಚನೆ ನಡೆಸಿ ನಿರ್ಧರಿಸಬಹುದಾಗಿದೆ.

ಅಲ್ಲದೆ, ಮಕ್ಕಳು ಭಾಷೆ ಮತ್ತು ಗಣಿತದ ಮೂಲಭೂತ ಕೌಶಲಗಳನ್ನು ಆಸಕ್ತಿದಾಯಕ ವಿಧಾನಗಳಲ್ಲಿ ಕಲಿಯುವಂತೆ ಹಾಗೂ ಅವರ ಕಲಿಕೆಗೆ ಭಂಗ ಬರದಂತೆ ನೋಡಿಕೊಳ್ಳಲು ಲಭ್ಯವಿರುವ ಸಂಪನ್ಮೂಲಗಳ ಸಹಾಯದಿಂದ ಮಕ್ಕಳಿಗೆ ಯಾವ ರೀತಿಯ ಕಲಿಕಾ ಅವಕಾಶಗಳನ್ನು ನೀಡಬಹುದು ಎಂಬ ವಿಚಾರವಾಗಿ CRCಯು ಶಿಕ್ಷಕರೊಂದಿಗೆ ಚರ್ಚಿಸಬಹುದು. ಸ್ಥಳೀಯ ಭಾಷೆಯಲ್ಲಿ ಸಣ್ಣ ಕವನಗಳು, ಕಥೆಗಳ ಚಾರ್ಟುಗಳು,  ಹಾಗೂ ಪುಟ್ಟ ಪುಸ್ತಕಗಳಂತಹ ಪಠ್ಯಸಾಮಗ್ರಿಗಳನ್ನು ಸಿದ್ಧಪಡಿಸಿ ಮಕ್ಕಳಿಗೆ ತಲುಪುವಂತೆ ನೋಡಿಕೊಳ್ಳಲು CRC ಯು DIET ಹಾಗೂ ಇತರ ಶೈಕ್ಷಣಿಕ ಸಂಸ್ಥೆಗಳೊಂದಿಗೆ ಸಮನ್ವಯದಿಂದ ಕೆಲಸ ಮಾಡಬೇಕು.

**ಕೆಲವು ಮುಖ್ಯ ಅಂಶಗಳು**

ಈ ಪ್ರಕ್ರಿಯೆಯಲ್ಲಿ ಶಿಕ್ಷಕರನ್ನು ಕಡೆಗಣಿಸದಂತೆ ಎಚ್ಚರಿಕೆ ವಹಿಸಬೇಕು. ಕೆಲಕಾಲದಿಂದ ರಾಜ್ಯದ ಒಂದೆರಡು ಸಂಸ್ಥೆಗಳು ಪಠ್ಯಪುಸ್ತಕಗಳನ್ನು ಹಾಗೂ ಅಭ್ಯಾಸ ಪತ್ರಿಕೆಗಳನ್ನು ರೂಪಿಸುವ ಅಭ್ಯಾಸ ಆಚರಣೆಗೆ ಬಂದಿದೆ. ಹೀಗೆ ಸಿದ್ಧಪಡಿಸಲಾದ ಸಾಮಗ್ರಿಯನ್ನು ಶಿಕ್ಷಕರಿಗೆ ತಲುಪಿಸಲಾಗುತ್ತಿದ್ದು, ಅವನ್ನು ಅವರು ನಿಗದಿಪಡಿಸಿದ ಸಮಯದಲ್ಲಿ ಕಾರ್ಯರೂಪಕ್ಕೆ ತರಬೇಕೆಂದು ಸೂಚಿಸಲಾಗುತ್ತಿದೆ. ಇದರಲ್ಲಿ ಶಿಕ್ಷಕರಿಗೆ ಯಾವುದೇ ಆಸಕ್ತಿ ಇರುವುದಿಲ್ಲ. ಅವರು ಅದನ್ನು ಸರ್ಕಾರಿ ಆದೇಶದಂತೆ ಪಾಲಿಸುತ್ತಾರೆ, ಅಷ್ಟೆ. ಶಿಕ್ಷಕರಿಗೆ ಅಭ್ಯಾಸ ಪತ್ರಿಕೆಗಳನ್ನು ರಚಿಸುವ ಹಾಗೂ ಮಕ್ಕಳಿಗೆ ಕಲಿಸುವ ವಿಧಾನಗಳನ್ನು ಸಿದ್ಧಪಡಿಸುವ ಸ್ವಾತಂತ್ರ್ಯ ಸಿಕ್ಕರೆ ಫಲಿತಾಂಶವು ಉತ್ತಮತರದ್ದೂ, ಹೆಚ್ಚು ಪ್ರಭಾವಕಾರಿಯೂ ಆಗುತ್ತದೆ. ಇದಕ್ಕಾಗಿ ಶಿಕ್ಷಕರಿಗೆ ತರಬೇತಿ ನೀಡಲು ನಿಯಮಿತವಾಗಿ ಕಾರ್ಯಾಗಾರಗಳನ್ನು ಆಯೋಜಿಸಬಹುದಾಗಿದೆ.

ವರ್ತಮಾನದ ಪರಿಸ್ಥಿತಿಯಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಕಾರ್ಯತತ್ಪರವಾಗಿರುವ ಎಲ್ಲಾ ವ್ಯಕ್ತಿಗಳು ಹಾಗೂ ಸಂಸ್ಥೆಗಳು ತಮ್ಮ ಪಾತ್ರಗಳನ್ನು ಕುರಿತು ಯೋಚಿಸಬೇಕಿದೆ. ನಾವು ಮಕ್ಕಳೊಡನೆ ವಿಭಿನ್ನ ಸನ್ನಿವೇಶಗಳಲ್ಲಿ, ವಿಶೇಷವಾಗಿ ಕೋವಿಡ್–19ರ ಅನುಭವದ ಅನಂತರದ ಈ ಸನ್ನಿವೇಶದಲ್ಲಿ, ಹೇಗೆ ಕೆಲಸ ಮಾಡಬಹುದೆಂಬ ಅಧ್ಯಯನವನ್ನು ಕೊಂಚಮಟ್ಟಿಗೆ ಕೈಗೊಳ್ಳಬೇಕಿದೆ.

DIET, BRC ಮತ್ತು CRC ಸಂಸ್ಥೆಗಳ ಜೊತೆಯಲ್ಲಿ ನಮ್ಮ ಶಾಲೆಗಳು ಎಷ್ಟು ಹಾಗೂ ಯಾವ ವಿದ್ಯಾರ್ಥಿಗಳು ಶಾಲೆ ತೊರೆದಿದ್ದಾರೆ ಎಂದು; ಯಾರು ಹಿಂತಿರುಗಿದರು,  ಯಾರು ಹಿಂತಿರುಗಲಿಲ್ಲ ಎಂದು ಕೂಡ ವಿಶ್ಲೇಷಿಸುವ ಅಗತ್ಯವಿದೆ. ಅಧ್ಯಯನದಲ್ಲಿ ಹಿಂದೆ ಉಳಿದುಕೊಂಡಿರುವ ಸಮಸ್ಯೆಯನ್ನು ಎದುರಿಸುತ್ತಿರುವ ಪ್ರತಿ ಮಗುವೂ ತನ್ನ ವಯಸ್ಸಿಗೆ ಸೂಕ್ತವಾದ ಕಲಿಕೆಯ ಹಂತವನ್ನು ತಲುಪುವಂತಾಗಲು "ಶಾಲೆಗೆ ಮರಳಿ" ಕಾರ್ಯಕ್ರಮವು ಶಾಲೆ ತೊರೆದ ಎಲ್ಲರನ್ನೂ ಪತ್ತೆ ಹಚ್ಚುವುದನ್ನು ಖಾತ್ರಿಪಡಿಸಬೇಕು. ಸಾಂಕ್ರಾಮಿಕ ರೋಗದ ಕಾರಣದಿಂದಾಗಿ ಯಾವ ಮಕ್ಕಳ ಆರ್ಥಿಕ ಪರಿಸ್ಥಿತಿ ಏರುಪೇರಾಗಿ ಶಾಲೆಗೆ ಬರಲು ಆಗುತ್ತಿಲ್ಲವೋ ಅಥವಾ ಯಾವ ಮಕ್ಕಳ ಪೋಷಕರು ಕೋವಿಡ್ ಸಾಂಕ್ರಾಮಿಕದ ಭಯದಿಂದಾಗಿ ಮಕ್ಕಳನ್ನು ಶಾಲೆಗೆ ಕಳುಹಿಸುತ್ತಿಲ್ಲವೋ ಅವರ ಬಗ್ಗೆ ನಾವು ಯೋಚಿಸಬೇಕಿದೆ.

ಅಂತಹ ಮಕ್ಕಳು ಹಾಗೂ ಅವರ ಪಾಲಕರೊಂದಿಗೆ ನಾವು ಇದನ್ನು ಮಾಡಬಹುದಾಗಿದೆ:

1. ಮಕ್ಕಳು ಶಾಲೆಗೆ ಹಿಂದಿರುಗುವಂತಾಗಲು, ಮಕ್ಕಳು ಹಾಗೂ ಪೋಷಕರಿಗೆ ಶಾಲಾ ಉಸ್ತುವಾರಿ ಸಮಿತಿ/ವೈದ್ಯರು/ಶಿಕ್ಷಕರು ಹಾಗೂ ಪಂಚಾಯತಿ ಅಧ್ಯಕ್ಷರಂತಹ ಪ್ರಭಾವಶಾಲಿ ವ್ಯಕ್ತಿಗಳ ಮತ್ತು ಸಾರ್ವಜನಿಕ ಪ್ರತಿನಿಧಿಗಳ ಕಡೆಯಿಂದ ಸಲಹೆ ಕೊಡಿಸಬಹುದು.

2. ನಿಗದಿಪಡಿಸಿದ ತರಗತಿ–ಗುಣಮಟ್ಟ ಹಾಗೂ ಮಕ್ಕಳ ನಿಜವಾದ ತರಗತಿ–ಗುಣಮಟ್ಟಗಳ ನಡುವಿನ ಬಿರುಕನ್ನು ಮುಚ್ಚಲು "ನಿರ್ಣಾಯಕ ಬಿಂದು ಆಧಾರಿತ ಮೌಲ್ಯಮಾಪನ"ವನ್ನು[1] ಅವಲಂಬಿಸಿ ಸೇತುಬಂಧ ಪಾಠಗಳನ್ನು ರೂಪಿಸುವುದು.

ಅಡಿಟಿಪ್ಪಣಿಗಳು

1. ಅವರಿಗಾಗಿ ವರ್ಷಗಳು ಕಾಯುವುದಿಲ್ಲ: ಕೋವಿಡ್–19 ನಂತಹ ಸಾಂಕ್ರಾಮಿಕ ರೋಗದ ಕಾರಣದಿಂದಾಗಿ ಮಕ್ಕಳ ಶಿಕ್ಷಣದ ಹಕ್ಕಿನಲ್ಲಿ ಅಸಮಾನತೆಗಳು ಹೆಚ್ಚಾಗಿವೆ. https://www.hrw.org/report/2021/05/17/years-dont-wait-them/increased-inequalities-childrens-right-education-due-covid

2. ಎನ್.ಸಿ.ಆರ್.ಟಿ: ನ್ಯಾಷನಲ್ ಕೌನ್ಸಿಲ್ ಆಫ್ ಎಜುಕೇಶನಲ್ ರಿಸರ್ಚ್ ಅಂಡ್ ಟ್ರೈನಿಂಗ್ (ರಾಷ್ಟ್ರೀಯ ಶೈಕ್ಷಣಿಕ ಸಂಶೋಧನೆ ಹಾಗೂ ತರಬೇತಿ ಪರಿಷದ್)

   ಎಸ್.ಸಿ.ಆರ್.ಟಿ: ಸ್ಟೇಟ್ ಕೌನ್ಸಿಲ್ ಆಫ್ ಎಜುಕೇಶನಲ್ ರಿಸರ್ಚ್ ಅಂಡ್ ಟ್ರೈನಿಂಗ್ (ರಾಜ್ಯ ಶೈಕ್ಷಣಿಕ ಸಂಶೋಧನೆ ಹಾಗೂ ತರಬೇತಿ ಪರಿಷದ್)

   ಡಿ.ಐ.ಇ.ಟಿ: ಡಿಸ್ಟ್ರಿಕ್ಟ್ ಇನ್ಸಟಿಟ್ಯೂಟ್ ಆಫ್ ಎಜುಕೇಶನಲ್ ಟ್ರೈನಿಂಗ್ (ಜಿಲ್ಲಾ ಶೈಕ್ಷಣಿಕ ತರಬೇತಿ ಸಂಸ್ಥೆ)

   ಬಿ.ಆರ್.ಸಿ: ಬ್ಲಾಕ್ ರಿಸೋರ್ಸ್ ಸೆಂಟರ್ (ಬ್ಲಾಕ್ ಸಂಪನ್ಮೂಲ ಕೇಂದ್ರ)

   ಸಿ.ಆರ್.ಸಿ: ಕ್ಲಸ್ಟರ್ ರಿಸೋರ್ಸ್ ಸೆಂಟರ್ (ಕ್ಲಸ್ಟರ್ ಸಂಪನ್ಮೂಲ ಕೇಂದ್ರ)

**ಸುಚಿ ದೂಬೇ** ಅವರು ಇಂದೋರಿನ ದೇವಿ ಅಹಿಲ್ಯಾ ವಿಶ್ವವಿದ್ಯಾಲಯದ ಡಿಜಿಟಲ್ ಇನ್‌ಸ್ಟ್ರುಮೆಂಟೇಶನ್‌ನಲ್ಲಿ ಎಂಜಿನಿಯರಿಂಗ್ ಪದವೀಧರೆ. ಇವರು ಅಜೀಂ ಪ್ರೇಮ್‌ಜಿ ಫೌಂಡೇಶನ್ನಿನ ಫೆಲೋಶಿಪ್ ಕಾರ್ಯಕ್ರಮಕ್ಕೆ 2014ರಲ್ಲಿ ಸೇರಿಕೊಂಡು, ರಾಜಸ್ಥಾನದ ಪಾಲಿ ಜಿಲ್ಲೆಯ ಬಾಲಿ ಬ್ಲಾಕಿನ ತಂಡದೊಂದಿಗೆ ಕಾರ್ಯನಿರ್ವಹಿಸಿದ್ದಾರೆ. ಫೆಲೋಶಿಪ್ ಮುಗಿಸಿದ ನಂತರ ಇವರು ಬಾನ್ಸವಾರಾದ ಸಂಪನ್ಮೂಲ ವ್ಯಕ್ತಿಯಾಗಿ ಗಣಿತದ ಅರ್ಥವನ್ನು ಕಟ್ಟಿಕೊಡಲು ಶಿಕ್ಷಕರೊಂದಿಗೆ 2020 ರವರೆಗೆ ದುಡಿದಿದ್ದಾರೆ. ಮಾರ್ಚ್2021ರಿಂದ "ಆರಂಭಿಕ ಬಾಲ್ಯಾವಸ್ಥೆಯ ಆರೈಕೆ ಮತ್ತು ಶಿಕ್ಷಣ" (ECCE) ಕ್ಷೇತ್ರದಲ್ಲಿ ಸಿರೋಹೀ ಪಟ್ಟಣದ ಅಜೀಂ ಪ್ರೇಮ್‌ಜಿ ಫೌಂಡೇಶನ್ನಿನ ಜಿಲ್ಲಾ ಸಂಸ್ಥೆಯೊಂದಿಗೆ ಕೆಲಸ ಮಾಡುತ್ತಿದ್ದಾರೆ. ಚಿತ್ರ ಬಿಡಿಸುವುದು ಮತ್ತು ಮಕ್ಕಳಿಗೆ ಕಥೆ ಹೇಳುವುದು ಎಂದರೆ ಇವರಿಗೆ ಅಚ್ಚುಮೆಚ್ಚು. ಇವರನ್ನು suchi.dubay@azimpremjifoundation.org ಇಮೇಲ್ ಐಡಿಯಲ್ಲಿ ಸಂಪರ್ಕಿಸಬಹುದು.